ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತೊಂದನೆಯ ಅಧಿವೇಶನ
ಸೋಮವಾರ, ದಿನಾಂಕ : 28 ನೇ ಸೆಪ್ಟೆಂಬರ್, 2020

ರಾಜ್ಯದಲ್ಲಿ ಕೋವಿಡ್-19 ಕಾರಣದಿಂದ ಮೃತರಾದವರ ಶವಸಂಸ್ಕಾರ ಕುರಿತು

ಶ್ರೀ ಎಸ್.ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ) –

77 (931) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿ ಕೋವಿಡ್ ಸೋಂಕಿಗೆ ತುತ್ತಾದವರ ಸಂಖ್ಯೆ ಎಷ್ಟು; ಅವರಲ್ಲಿ ಮರಣ ಹೊಂದಿದವರ ಸಂಖ್ಯೆ ಎಷ್ಟು; ಇವರಲ್ಲಿ ಸರ್ಕಾರಿ ಆಸ್ಪತ್ರೆಯಲ್ಲಿ ಮತ್ತು ಖಾಸಗಿ ಆಸ್ಪತ್ರೆಯಲ್ಲಿ ಮರಣ ಹೊಂದಿದವರ ಸಂಖ್ಯೆ ಎಷ್ಟು; (ಜಿಲ್ಲಾವಾರು ವಿವರ ನೀಡುವುದು)

(ಆ) ಕೋವಿಡ್-19 ಸೋಂಕಿಗೆ ತುತ್ತಾಗಿ ಮರಣ ಹೊಂದಿದವರ ಅಂತಿಮ ಸಂಸ್ಕಾರಕ್ಕೆ ಸರ್ಕಾರದಿಂದ ನೀಡಲಾದ ಮಾರ್ಗಸೂಚಿ ಯಾವುದು; ರಾಜ್ಯದಲ್ಲಿ ಸೋಂಕಿನಿಂದ ಮರಣ ಹೊಂದಿದವರನ್ನು ಕುಟುಂಬದವರ ಸಮಕ್ಷಮ ಸರ್ಕಾರದ ವತಿಯಿಂದ ಮಾಡಲಾದ ಶವಸಂಸ್ಕಾರದ ಸಂಖ್ಯೆ ಎಷ್ಟು; ಕುಟುಂಬದವರಿಗೆ ಹಸ್ತಾಂತರಿಸಿ ಮಾಡಲಾದ ಶವಸಂಸ್ಕಾರದ ಸಂಖ್ಯೆ ಎಷ್ಟು; ಕುಟುಂಬದವರನ್ನು ಪತ್ತೆ ಹಚ್ಚಲಾಗದೇ ಸರ್ಕಾರದ ವತಿಯಿಂದ ಮಾಡಲಾದ ಶವಸಂಸ್ಕಾರದ ಸಂಖ್ಯೆ ಎಷ್ಟು; (ಜಿಲ್ಲಾವಾರು ವಿವರ ನೀಡುವುದು)

(ಇ) ಕೆಲವು ಶವ ದಹನ/ದಫನ ಮಾಡಲು ಸಾರ್ವಜನಿಕರಿಂದ ವಿರೋಧ ವ್ಯಕ್ತವಾದ ಪ್ರಕರಣಗಳೆಷ್ಟು; (ಪ್ರಕರಣವಾರು ವಿವರ ನೀಡುವುದು)
ಈ ವಿರೋಧವನ್ನು ನಿಯಂತ್ರಿಸಲು ಸರ್ಕಾರದಿಂದ ಕೈಗೊಂಡ ಕ್ರಮಗಳೇನು?